# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 95(772) |
| ಸದಸ್ಯರ ಹೆಸರು | : | ಶ್ರೀ ಗೋವಿಂದ ರಾಜು (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 15-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ನಗರಸಭೆಯಲ್ಲಿರುವ ವಾರ್ಡ್‌ಗಳ ಸಂಖ್ಯೆ ಎಷ್ಟು; ಮತ್ತು ಒಟ್ಟು ವಿಸ್ತೀರ್ಣವೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ಕೋಲಾರ ನಗರಸಭೆಯಲ್ಲಿ ಒಟ್ಟು 35 ವಾರ್ಡುಗಳು ಇದ್ದು, ನಗರಸಭೆಯ ಒಟ್ಟು ವಿಸ್ತೀರ್ಣ-26.56 ಚದರ ಕಿ.ಮೀ ಇರುತ್ತದೆ. |
| ಆ) | ಕೋಲಾರ ನಗರಸಭೆಯ ವ್ಯಾಪ್ತಿಯಲ್ಲಿ ಬರುವ ರಸ್ತೆಗಳು ಸಂಪೂರ್ಣ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | **ಅಮೃತ್ ಯೋಜನೆಯಡಿ** ಕೋಲಾರ ನಗರಸಭೆ ವ್ಯಾಪ್ತಿಯಲ್ಲಿ ಲೆಕ್ಕಶೀರ್ಷಿಕೆ:2217-05-191-0-03ಯಡಿ ಕೆಯುಡಬ್ಲ್ಯೂಎಸ್ ಮತ್ತು ಡಿಬಿ ವತಿಯಿಂದ 2015-16ನೇ ಸಾಲಿನಲ್ಲಿ ಒಳಚರಂಡಿ ಯೋಜನೆಯನ್ನು ರೂ.73.00 ಕೋಟಿಗಳು ಮತ್ತು ಕುಡಿಯುವ ನೀರಿನ ಕಾಮಗಾರಿ ಯೋಜನೆಯನ್ನು ರೂ.17.23 ಕೋಟಿಗಳಲ್ಲಿ ಕೈಗೊಂಡಿದ್ದು, ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ರಸ್ತೆಗಳನ್ನು ಅಗೆದು ಕಾರ್ಯನಿರ್ವಹಿಸಲಾಗಿರುತ್ತದೆ. ಇದರಿಂದಾಗಿ ನಗರ ವ್ಯಾಪ್ತಿಯ ಬಹಳಷ್ಟು ರಸ್ತೆಗಳು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ) | ಹಾಗಿದ್ದಲ್ಲಿ, ರಸ್ತೆಗಳು ಸಂಪೂರ್ಣ ಹಾಳಾಗಿರುವುದರಿಂದ ಸಾರ್ವಜನಿಕರಿಗೆ ಹಾಗೂ ವಾಹನ ಸವಾರರಿಗೆ ತುಂಬಾ ತೊಂದರೆಯಾಗುತ್ತಿರುವುದು ನಿಜವೇ; | ಒಳಚರಂಡಿ ಮತ್ತು ಕುಡಿಯುವ ನೀರಿನ ಪೈಪ್‌ಲೈನ್‌ಗಳನ್ನು ಅಳವಡಿಸಲು ರಸ್ತೆಗಳನ್ನು ಅಗೆದು ಕಾರ್ಯನಿರ್ವಹಿಸಲಾಗಿರುತ್ತದೆ. ಇದರಿಂದಾಗಿ ನಗರ ವ್ಯಾಪ್ತಿಯ ಬಹಳಷ್ಟು ರಸ್ತೆಗಳು ಹಾಳಾಗಿರುವುದರಿಂದ ವಾಹನ ಸವಾರರಿಗೆ ತೊಂದರೆಯಾಗಿರುತ್ತದೆ. |
| ಈ) | ಹಾಗಿದ್ದಲ್ಲಿ, ಈ ರಸ್ತೆಗಳನ್ನು ದುರಸ್ತಿಪಡಿಸಿ ಅಭಿವೃದ್ಧಿಪಡಿಸಲು ಇದುವರೆವಿಗೂ ಸರ್ಕಾರ ಕ್ರಮ ಕೈಗೊಳ್ಳದಿರುವುದು ನಿಜವೇ; | ನಗರ ಸ್ಥಳೀಯ ಸಂಸ್ಥೆಗಳಿಗೆ ಲಭ್ಯವಾಗುವ ವಿವಿಧ ಯೋಜನೆಯಡಿ ಅನುದಾನದ ಲಭ್ಯತೆಗೆ ಅನುಗುಣವಾಗಿ ಹಂತ ಹಂತವಾಗಿ ರಸ್ತೆಗಳನ್ನು ದುರಸ್ತಿ ಪಡಿಸಿ ಅಭಿವೃದ್ಧಿಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಉ) | ಹಾಗಿದ್ದಲ್ಲಿ, ಈ ರಸ್ತೆಗಳನ್ನು ಅಭಿವೃದ್ಧಿ ಪಡಿಸಲು ಕಾಮಗಾರಿಗಾಗಿ ಸರ್ಕಾರ ಅನುದಾನವನ್ನೇನಾದರೂ ನಿಗಧಿಪಡಿಸಿ ಬಿಡುಗಡೆ ಮಾಡಿದೆಯೇ; | **ನಗರೋತ್ಥಾನ (ಮುನಿಸಿಪಾಲಿಟಿ) ಹಂತ-3** ರಡಿ ರಸ್ತೆಗಳ ಅಭಿವೃದ್ಧಿಗಾಗಿ ಲೆಕ್ಕ ಶೀರ್ಷಿಕೆ: 3604-00-192-3-51 ಯೋಜನೆಯಡಿ 2018-19 ರಿಂದ 2020-21 ನೇ ಸಾಲಿನ ವರೆಗೆ 23.42 ಕಿಮೀ ರಸ್ತೆಗಳ ಅಭಿವೃದ್ಧಿಗಾಗಿ ರೂ.8.00 ಕೋಟಿ ಅನುದಾನ ಒದಗಿಸಲಾಗಿದೆ.<br><br>**14ನೇ ಹಣಕಾಸು ಆಯೋಗದ** ಲೆಕ್ಕ ಶೀರ್ಷಿಕೆ: 3604-00-192-8-00 ಅನುದಾನದಡಿ ಕೋಲಾರ ನಗರಸಭೆಗೆ 2015-16ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಒಟ್ಟು ಅನುದಾನ ರೂ.2694.56ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿರುತ್ತದೆ. |
| ಊ) | ಹಾಗಿದ್ದಲ್ಲಿ, ಯಾವ ಯಾವ ಲೆಕ್ಕಶೀರ್ಷಕೆಗಳಡಿ ಎಷ್ಟೆಷ್ಟು ಅನುದಾನವನ್ನು ಒದಗಿಸಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | |
| ಋ) | ಹಾಗಿದ್ದಲ್ಲಿ, ಎಷ್ಟು ಪ್ರಮಾಣದ ಅನುದಾನವನ್ನು ಒದಗಿಸಲಾಗಿದೆ ಮತ್ತು ರಸ್ತೆ ದುರಸ್ತಿ ಕಾಮಗಾರಿಗಳನ್ನು ಯಾವಾಗ ಕೈಗೆತ್ತಿಕೊಳ್ಳಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | |

ಸದರಿ ಅನುದಾನದಡಿ ರೂ. 495.81 ಲಕ್ಷ ಮೊತ್ತದ 48 ರಸ್ತೆ ಅಭಿವೃದ್ಧಿ / ದುರಸ್ತಿ ಕಾಮಗಾರಿಗಳನ್ನು ಕೈಗೊಂಡು, 41 ಸಂಖ್ಯೆ ರಸ್ತೆ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ ಹಾಗು ರಸ್ತೆ ಅಭಿವೃದ್ಧಿಗಾಗಿ ರೂ. 376.06 ಲಕ್ಷಗಳನ್ನು ವೆಚ್ಚ ಮಾಡಲಾಗಿರುತ್ತದೆ.

<u>15ನೇ ಹಣಕಾಸು ಆಯೋಗದಡಿ</u> ಕೋಲಾರ ನಗರಸಭೆಗೆ 2020-21ನೇ ಸಾಲಿಗೆ ಲೆಕ್ಕ ಶೀರ್ಷಿಕೆ: 3604-00-192-9-00 ಮುಕ್ತ ಅನುದಾನ ರೂ. 363.00 ಲಕ್ಷಗಳಲ್ಲಿ, ರೂ. 72.60 ಲಕ್ಷ ಮೊತ್ತದ 1 ರಸ್ತೆ ಅಭಿವೃದ್ಧಿ ಕಾಮಗಾರಿಯ ಕ್ರಿಯಾ ಯೋಜನೆಗೆ ಜಿಲ್ಲಾಧಿಕಾರಿಗಳಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪ್ರಾರಂಭಿಸಲಾಗಿದೆ.

<u>ಎಸ್.ಎಫ್.ಸಿ ಮುಕ್ತನಿಧಿ ಅನುದಾನದಡಿ</u> ಲೆಕ್ಕ ಶೀರ್ಷಿಕೆ: 3604-00-192-2-00 ಅಡಿಯಲ್ಲಿ 2018-19ನೇ ಸಾಲಿನಲ್ಲಿ ರೂ.41.30ಲಕ್ಷಗಳ ಅನುದಾನದಲ್ಲಿ 04 ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು 2019-20ನೇ ಸಾಲಿನಲ್ಲಿ ರೂ.25.77ಲಕ್ಷಗಳ ಅಂದಾಜು ಮೊತ್ತದಲ್ಲಿ 02 ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು 2020-21ನೇ ಸಾಲಿನಲ್ಲಿ ರೂ.15.06ಲಕ್ಷಗಳ ಅಂದಾಜು ಮೊತ್ತದಲ್ಲಿ 02 ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿರುತ್ತದೆ.

ಅನುದಾನದ ವಿವರ ಈ ಕೆಳಕಂಡಂತಿದೆ:

(ರೂ.ಲಕ್ಷಗಳಲ್ಲಿ)

| ವರ್ಷ | ಅನುದಾನ ಹಂಚಿಕೆ | ಅನುದಾನ ಬಿಡುಗಡೆ |
|---|---|---|
| 2018-19 | 475.62 | 319.20 |
| 2019-20 | 407.00 | 407.00 |
| 2020-21 | 150.69 | 75.31 |

ಸರ್ಕಾರದ ಆದೇಶ ಸಂಖ್ಯೆ:ನಅಇ 03 ಎಸ್.ಎಫ್.ಸಿ 2019, ದಿನಾಂಕ:09-01-2019ರಲ್ಲಿ ಕೋಲಾರ ನಗರಸಭೆ ವ್ಯಾಪ್ತಿಯಲ್ಲಿ ವಿವಿಧ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ರೂ.500.00 ಲಕ್ಷಗಳ ಎಸ್.ಎಫ್.ಸಿ ಅನುದಾನವನ್ನು ಮಂಜೂರು ಮಾಡಲಾಗಿರುತ್ತದೆ. ಆರ್ಥಿಕ ಇಲಾಖೆಯ ನಿರ್ದೇಶನದನ್ವಯ, ಸರ್ಕಾರದ ಪತ್ರ ಸಂಖ್ಯೆ:ನಅಇ 222 ಎಸ್.ಎಫ್.ಸಿ 2019, ದಿನಾಂಕ:13-09-2019ರಲ್ಲಿ ಸದರಿ ಅನುದಾನವನ್ನು ತಡೆ ಹಿಡಿಯಲಾಗಿರುತ್ತದೆ. ಆರ್ಥಿಕ ಇಲಾಖೆಯು ಸದರಿ ಅನುದಾನವನ್ನು ಮರು ಮಂಜೂರು ಮಾಡಿದಲ್ಲಿ ಮುಂದಿನ ಕ್ರಮವಹಿಸಲಾಗುವುದು.

ಕಡತ ಸಂಖ್ಯೆ:ನಅಇ 428 ಎಸ್.ಎಫ್.ಸಿ 2020

(ಡಾ|| ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಹಾಗೂ
ರೇಷ್ಮೆ ಸಚಿವರು